ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೆರಡನೆಯ ಅಧಿವೇಶನ

ಮಂಗಳವಾರ, ದಿನಾಂಕ : 15 ನೇ ಡಿಸೆಂಬರ್, 2020

ಕೆ. ಐ. ಎ. ಡಿ. ಬಿ. ವತಿಯಿಂದ ಸೋಂಪುರ ಹೋಬಳಿಯ ಜಮೀನಿನ ಬಗ್ಗೆ

ಶ್ರೀ ಪ್ರಕಾಶ್ ಕೆ. ರಾಥೋಡ್(ನಾಮನಿರ್ದೇಶನ ಹೊಂದಿದವರು) -

103 (823) ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ -

(ಅ) ಕೆ. ಐ. ಎ. ಡಿ. ಬಿ ವತಿಯಿಂದ ಸೋಂಪುರ ಹೋಬಳಿಯಲ್ಲಿ ಎಷ್ಟು ಎಕರೆ ಜಮೀನನ್ನು ಕೈಗಾರಿಕಾ ಉದ್ದೇಶಕ್ಕಾಗಿ ವಶಪಡಿಸಿಕೊಳ್ಳಲಾಗಿದೆ; ಹಾಗೂ ಯಾವ ಯಾವ ಕೈಗಾರಿಕೆಗಳಿಗೆ ಹಂಚಿಕೆ ಮಾಡಲಾಗಿದೆ; (ಸಂಪೂರ್ಣ ಮಾಹಿತಿ ಒದಗಿಸುವುದು)

(ಆ) ಕೈಗಾರಿಕಾ ಉದ್ದೇಶಕ್ಕಾಗಿ ಹಂಚಿಕೆ ಮಾಡಿರುವ ಜಮೀನಿಗೆ ಎಕರೆಗೆ ಎಷ್ಟು ಹಣ ನಿಗದಿ ಮಾಡಲಾಗಿದೆ;

(ಇ) ಹಂಚಿಕೆ ಮಾಡಲಾದ 2ನೇ ಹಂತದಲ್ಲಿ ವಾಯು ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಬಫರ್ ಜೋನ್‌ಗೆ ಬರುವ ಪ್ರದೇಶವನ್ನು ಕೈಗಾರಿಕಾ ಉದ್ದೇಶದಿಂದ ಕೈಬಿಡಲಾಗಿದೆಯೇ; ಹಾಗಿದ್ದಲ್ಲಿ, ಸದರಿ ಹಂಚಿಕೆಯಾಗಿದ್ದ ಕೈಗಾರಿಕೆಗಳಿಗೆ ಬೇರೆ ಯಾವ ಸ್ಥಳದಲ್ಲಿ ಹಂಚಿಕೆ ಮಾಡಲಾಗಿದೆ; (ವಿವರ ಒದಗಿಸುವುದು)

(ಈ) ಕೆ. ಐ. ಎ. ಡಿ. ಬಿ. ವತಿಯಿಂದ ಹಂಚಿಕೆ ಮಾಡುವಾಗ ಒಂದು ಎಕರೆಗೆ ರೂ.57.00 ಲಕ್ಷ ನಿಗದಿ ಮಾಡಲಾಗಿದ್ದು, ನಂತರ ಬಫರ್ ಜೋನ್ ಇದ್ದ ಕಾರಣ ರೂ. 75.00 ಲಕ್ಷಕ್ಕೆ ಏರಿಕೆ ಮಾಡಿರುವುದು ನಿಜವೇ; ಹಾಗಿದ್ದಲ್ಲಿ, ಈ ಸಂಬಂಧ ವಿಧಿಸುತ್ತಿರುವ ನೋಂದಣಿ ಶುಲ್ಕ ಎಷ್ಟು; (ವಿವರ ಒದಗಿಸುವುದು)

(ಉ) ಹಾಲಿ ರೂ. 57.00 ಲಕ್ಷಕ್ಕೆ ನೋಂದಣಿ ಮಾಡಿಕೊಂಡಿದ್ದು ನಂತರ ರೂ.75.00 ಲಕ್ಷ ನಿಗದಿ ಮಾಡಿ ನಂತರ ವ್ಯತ್ಯಾಸದ ಹಣವನ್ನು ಕಟ್ಟಿ ನೋಂದಣಿ ಮಾಡಲು ನೋಂದಣಾಧಿಕಾರಿಗಳು ಒಟ್ಟು ರೂ. 75.00 ಲಕ್ಷದ ನೋಂದಣಿ ಶುಲ್ಕ ಪಡೆಯುತ್ತಿರುವುದು ಹಾಗೂ ರೂ. 57.00 ಲಕ್ಷಕ್ಕೆ ನೋಂದಣಿ ಹಣವನ್ನು ಕಟ್ಟಿರುವುದನ್ನು ಪರಿಗಣಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದನ್ನು ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು?